# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2287

ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಕುರಾಲಪ್ಪ ಎಂ.ಪಿ. (ಸುಜಾ)
(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 21.03.2022

ಉತ್ತರಿಸುವ ಸಚಿವರು : ಅರಣ್ಯ ಮತ್ತು ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕೊಡಗು ಜಿಲ್ಲಾದ್ಯಂತ ಎಪಿಎಲ್, ಬಿಪಿಎಲ್ ಮತ್ತು ಅಂತ್ಯೋದಯ ಪಡಿತರ ಚೀಟಿಯನ್ನು ಹೊಂದಿರುವ ಫಲಾನುಭವಿಗಳೆಷ್ಟು;......(ಸಂಪೂರ್ಣ ಮಾಹಿತಿ ನೀಡುವುದು) | ಕೊಡಗು ಜಿಲ್ಲೆಯಲ್ಲಿ ಅಂತ್ಯೋದಯ, ಆದ್ಯತಾ ಮತ್ತು ಆದ್ಯತೇತರ ಪಡಿತರ ಚೀಟಿಗಳನ್ನು ಹೊಂದಿರುವ ಫಲಾನುಭವಿಗಳ ವಿವರ ಈ ಕೆಳಕಂಡಂತಿವೆ. (ಕೋಷ್ಟಕ 1 ನೋಡಿ) |
| ಆ | ಕೊಡಗು ಜಿಲ್ಲಾದ್ಯಂತ ಪಡಿತರ ಚೀಟಿಗಾಗಿ ಹೊಸದಾಗಿ ಸಲ್ಲಿಸಿದ ಅರ್ಜಿಗಳ ಸಂಖ್ಯೆ ಎಷ್ಟು; ಈ ಅರ್ಜಿದಾರರಿಗೆ ಯಾವ ಕಾಲಮಿತಿಯಲ್ಲಿ ಪಡಿತರ ಚೀಟಿಯನ್ನು ಒದಗಿಸಲಾಗುವುದು; (ಸಂಪೂರ್ಣ ವಿವರ ನೀಡುವುದು) | ಕೊಡಗು ಜಿಲ್ಲೆಯಲ್ಲಿ ಪಡಿತರ ಚೀಟಿಯನ್ನು ಕೋರಿ ಸಲ್ಲಿಸಿರುವ ಅರ್ಜಿದಾರರ ವಿವರ ಈ ಕೆಳಕಂಡಂತಿವೆ. (ಕೋಷ್ಟಕ 2 ನೋಡಿ) ಪಡಿತರ ಚೀಟಿಯನ್ನು ಕೋರಿ ಸಲ್ಲಿಸಿರುವ ಅರ್ಜಿಗಳ ಅರ್ಹ ಫಲಾನುಭವಿಗಳಿಗೆ ಪಡಿತರ ಚೀಟಿಯನ್ನು ವಿತರಿಸುವ ಕಾರ್ಯ ಚಾಲ್ತಿಯಲ್ಲಿರುತ್ತದೆ. |

| ಕ್ರ. ಸಂ | ತಾಲ್ಲೂಕಿನ ಹೆಸರು | ಚಾಲ್ತಿಯಲ್ಲಿರುವ ಪಡಿತರ ಚೀಟಿಗಳು | | |
|---|---|---|---|---|
| | | ಅಂತ್ಯೋದಯ | ಆದ್ಯತಾ | ಆದ್ಯತೇತರ |
| 1 | ಮಡಿಕೇರಿ | 2078 | 22420 | 13884 |
| 2 | ವಿರಾಜಪೇಟೆ | 5030 | 31778 | 14178 |
| 3 | ಸೋಮವಾರ ಪೇಟೆ | 3028 | 42407 | 8734 |
| | ಒಟ್ಟು | 10136 | 96605 | 36796 |

| ಕ್ರ.ಸಂ | ತಾಲ್ಲೂಕಿನ ಹೆಸರು | ಸ್ವೀಕೃತವಾಗಿರುವ ಅರ್ಜಿಗಳು | ವಿಲೇವಾರಿಯಾದ ಪಡಿತರ ಚೀಟಿಗಳು | ವಿತರಣೆ ಮಾಡಲು ಬಾಕಿಯಿರುವ ಅರ್ಜಿಗಳು |
|---|---|---|---|---|
| 1 | ಮಡಿಕೇರಿ | 5101 | 4595 | 506 |
| 2 | ವಿರಾಜಪೇಟೆ | 5807 | 3410 | 2397 |
| 3 | ಸೋಮವಾರ ಪೇಟೆ | 6548 | 4157 | 2391 |
| | ಒಟ್ಟು | 17456 | 12162 | 5294 |

<table>
<tr>
<td>ಇ</td>
<td>ಕೊಡಗು ಜಿಲ್ಲೆಯಲ್ಲಿ ಪಡಿತರ ಚೀಟಿದಾರರಿಗೆ ಯಾವ-ಯಾವ ಆಹಾರ ಧಾನ್ಯಗಳನ್ನು ವಿತರಿಸಲಾಗುತ್ತಿದೆ? (ವಿವರ ನೀಡುವುದು)</td>
<td>ಪ್ರಸ್ತುತ ರಾಜ್ಯದಲ್ಲಿ ಅಂತ್ಯೋದಯ, ಆದ್ಯತಾ ಆದ್ಯತೇತರ ಪಡಿತರ ಚೀಟಿಯನ್ನು ಹೊಂದಿರುವ ಫಲಾನುಭವಿಗಳಿಗೆ ವಿತರಿಸಲಾಗುತ್ತಿರುವ ಆಹಾರಧಾನ್ಯಗಳ ವಿವರ ಈ ಕೆಳಕಂಡಂತಿದೆ.
<table>
<tr><th>ಪಡಿತರ ಚೀಟಿ ವರ್ಗ</th><th>ಎನ್‌ಎಫ್‌ಎಸ್‌ಎ</th><th>ದರ ರೂ.ಗಳಲ್ಲಿ</th></tr>
<tr><td>ಅಂತ್ಯೋದಯ</td><td>ಪ್ರತಿ ಪಡಿತರ ಚೀಟಿಗೆ 35 ಕೆ.ಜಿ ಆಹಾರಧಾನ್ಯ (ಅಕ್ಕಿ/ರಾಗಿ/ಜೋಳ)</td><td rowspan="2">ಉಚಿತ</td></tr>
<tr><td>ಆದ್ಯತಾ (ಬಿಪಿಎಲ್)</td><td>ಪ್ರತಿ ಫಲಾನುಭವಿಗೆ 5 ಕೆ.ಜಿ ಆಹಾರಧಾನ್ಯ (ಅಕ್ಕಿ/ ರಾಗಿ/ ಜೋಳ) ಹಾಗೂ ಪ್ರತಿ ಪಡಿತರ ಚೀಟಿಗೆ 2 ಕೆ.ಜಿ. ಗೋಧಿ</td></tr>
<tr><td>ಆದ್ಯತೇತರ (ಎಪಿಎಲ್)</td><td>ಏಕ ಸದಸ್ಯ ಪಡಿತರ ಚೀಟಿಗೆ 5 ಕೆ.ಜಿ ಅಕ್ಕಿ, 2 ಮತ್ತು ಹೆಚ್ಚಿನ ಸದಸ್ಯರಿರುವ ಪಡಿತರ ಚೀಟಿಗೆ 10 ಕೆ.ಜಿ ಅಕ್ಕಿ</td><td>ಪ್ರತಿಕೆ.ಜಿ.ಗೆ ರೂ.15/- ರಂತೆ</td></tr>
</table>
</td>
</tr>
<tr>
<td>ಈ</td>
<td>ಕೊಡಗು ಜಿಲ್ಲಾದ್ಯಾಂತ ಎಷ್ಟು ನ್ಯಾಯಬೆಲೆ ಅಂಗಡಿಗಳಿವೆ; ಹೊಸ ನ್ಯಾಯಬೆಲೆ ಅಂಗಡಿ ಮಂಜೂರಾತಿಗಾಗಿ ಅರ್ಜಿ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? (ಬಂದಿದ್ದಲ್ಲಿ ತಾಲ್ಲೂಕುವಾರು ಮಾಹಿತಿ ನೀಡುವುದು)</td>
<td>ಕೊಡಗು ಜಿಲ್ಲೆಯಲ್ಲಿ ಒಟ್ಟು 272 ನ್ಯಾಯಬೆಲೆ ಅಂಗಡಿಗಳು ಕಾರ್ಯನಿರ್ವಹಿಸುತ್ತಿವೆ<br>ಕೊಡಗು ಜಿಲ್ಲೆಯ ಮಡಿಕೇರಿ ನಗರ ಮತ್ತು ಗ್ರಾಮಾಂತರ ಪ್ರದೇಶಗಳಲ್ಲಿ ಒಟ್ಟು 14 ಗ್ರಾಮಗಳಿಗೆ ಹೊಸ ನ್ಯಾಯಬೆಲೆ ಅಂಗಡಿಯನ್ನು ತೆರೆಯಲು ಅರ್ಜಿ ಆಹ್ವಾನಿಸಲಾಗಿದ್ದು, 10 ಅರ್ಜಿಗಳು ಸ್ವೀಕೃತವಾಗಿರುತ್ತವೆ.</td>
</tr>
</table>

ಆನಾಸ 73 ಡಿಆರ್‌ಎ 2022 (ಇ-ಆಫೀಸ್)

(ಉಮೇಶ ವಿ. ಕತ್ತಿ)
ಅರಣ್ಯ ಮತ್ತು ಆಹಾರ, ನಾಗರಿಕ ಸರಬರಾಜು
ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.